# Contents

# ನಮ್ಮ ಮಾನಸ: ಅಂದು - ಇಂದು

'ನಮ್ಮ ಮಾನಸ' ತಿಂಗಳ ಪತ್ರಿಕೆ ಪ್ರಾರಂಭವಾದದ್ದು ೧೯೮೬ರಲ್ಲಿ. ಸ್ವಾಯತ್ತ ಮಹಿಳಾ ಸಂಸ್ಥೆ ಮಾನಸದ ಭಾಗವಾಗಿದ್ದ 'ನಮ್ಮ ಮಾನಸ' ಪತ್ರಿಕೆ ಮಹಿಳಾ ಚಳವಳಿಯ ಮುಖವಾಣಿಯಾಗಿ ಸುಮಾರು ೨೮ವರ್ಷ ಕರ್ನಾಟಕದಲ್ಲಿ ತನ್ನ ಛಾಪು ಮೂಡಿಸಿದೆ. ' ಮಾನವಿ' ಹೆಸರಿನಲ್ಲಿ ಪ್ರಾರಂಭವಾದ ಈ ಪತ್ರಿಕೆ 'ಮಾನಸ ತಿಂಗಳ ಪತ್ರಿಕೆ', 'ಮಾನಸ' ಹಾಗೂ ರಿಜಿಸ್ಟರ್ ಆಗುವಾಗ 'ನಮ್ಮ ಮಾನಸ' ವಾಗಿ ರೂಪುಗೊಂಡು ಕೆಲಸ ಮಾಡಿದೆ. ಸ್ವಾಯತ್ತತೆಯನ್ನು 'ಮಾನಸ ಪತ್ರಿಕೆ' ಅರ್ಥೈಸಿದ್ದು ಹೀಗೆ. ಕೇಡರ್ ಅಥವಾ ಲೀಡರ್ ಕಲ್ಪನೆ ಇಲ್ಲಿ ಇರಲಿಲ್ಲ. ಸಾಮುದಾಯಕ ನಾಯಕತ್ವಕ್ಕೆ ಮನ್ನಣೆ ಕೊಡುವುದಾಗಿತ್ತು. ಯಾವುದೇ ಸಾಂಸ್ಥಿಕ ಸ್ವರೂಪ, ರಚನೆ ಬೇಡ ಎನ್ನುವುದು ಎಲ್ಲರ ನಿಲುವಾಗಿತ್ತು. ಸರ್ಕಾರ ಅಥವಾ ವಿದೇಶೀ ನೆರವು ಯಾವ ಹಂಗಿಗೂ ಒಳಗಾಗದೇ ಪತ್ರಿಕೆಯನ್ನು ಪ್ರಕಟಿಸುವುದು ಮುಖ್ಯ ಉದ್ದೇಶವಾಗಿತ್ತು. ಚಳುವಳಿಗಳಲ್ಲಿ ಪಾರದರ್ಶಕತೆ ಇರುವ ಹಾಗೆ ಪತ್ರಿಕೆಯ ನಿಲುವು, ಧನಸಹಾಯ, ಸಾಂಸ್ಥಿಕ ರಚನೆಯಲ್ಲೂ ಪಾರದರ್ಶಕತೆ ಇದ್ದರೆ ಮಾತ್ರ ಚಳವಳಿ ಆಥವಾ ಪತ್ರಿಕೆ ಉಳಿಸಿ ಬೆಳೆಸುವುದು ಸಾಧ್ಯ ಎನ್ನುವ ಬದ್ಧತೆಯೊಂದಿಗೆ ೧೮೮೬ರಲ್ಲಿ ಮಾನಸ ಮಹಿಳಾ ವೇದಿಕೆ ಮಾನಸ ಮಹಿಳಾಪತ್ರಿಕೆಯನ್ನು ಪ್ರಾರಂಭಗೊಳಿಸಿತ್ತು. ಸಾಂಸ್ಥಿಕ ರಚನೆಗೆ ಬಂದಾಗ, ಮಾನಸದ ಸಭೆಗಳಿಗಾಗಿ ಮಾನಸ ಬಳಗದವರ ಮನೆಗಳನ್ನೇ ಹೆಚ್ಚಾಗಿ ಬಳಸಿಕೊಂಡಿದ್ದೇವೆ. ಚಳವಳಿಗಾಗಿ ಸಾರ್ವಜನಿಕ ಸ್ಥಳ ಉಪಯೋಗಿಸಬೇಕೆನ್ನುವ ನಂಬಿಕೆಗಾಗಿ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ಬಹಳ ವರ್ಷಗಳ ಕಾಲ ಪತ್ರಿಕೆಯ ಸಭೆ ನಡಸಿದ್ದೇವೆ. ಸಂಗ್ರಹವಾದ ಹಣ ಪತ್ರಿಕೆಗಾಗಿಯೇ ಖರ್ಚಾಗುತ್ತಿದ್ದರಿಂದ ಹಣವನ್ನು ಬ್ಯಾಂಕಿನಲ್ಲಿ ಫಿಕ್ಸೆಡ್ ಇಡುವುದಾಗಲೀ, ಬಡ್ಡಿಯ ಹಣ ಬಳಸುವುದಾಗಲೀ ನಾವು ಮಾಡಿಯೇ ಇಲ್ಲ, ಆ ನಂಬಿಕೆ ಮಾನಸಕ್ಕೆ ಇರಲೂ ಇಲ್ಲ. ೧೯೮೬ ರಿಂದ ೨೦೧೩ರ ವರೆಗೆ ಮಹಿಳಾ ಚಳವಳಿಯ ಆಂದೋಲನಗಳನ್ನು ಮಾತ್ರವಲ್ಲದೇ

ರೈತ, ಕಾರ್ಮಿಕ, ಮೂರನೇ ಲಿಂಗಿಗಳು, ದಲಿತರು , ಒಂಟಿ ಮಹಿಳೆಯರು, ಬೀದಿ ಕಸ ಗುಡಿಸುವ ಮಹಿಳೆಯರು, ಅಸಂಘಟಿತ ವಲಯ, ಗಾರ್ಮೆಂಟ್ ಮಹಿಳೆಯರು ಹೀಗೆ ಹಲವಾರು ಮಾನವತೆ ನೆಲೆಯ ಹೋರಾಟಗಳ ದಾರ್ಶನಿಕತೆಯನ್ನು ಸ್ತ್ರೀವಾದಿ ನೆಲೆಯಲ್ಲಿ ಬಿಂಬಿಸುವ ಲೇಖನಗಳನ್ನು ಪ್ರಕಟಿಸುತ್ತಲೇ ಸಂವಾದಕ್ಕೆ 'ನಮ್ಮ ಮಾನಸ' ದಾರಿಮಾಡಿಕೊಟ್ಟಿದೆ. ಸಾಹಿತ್ಯ ಇತಿಹಾಸ, ವಿಜ್ಞಾನ ಇಂತಹ ಕ್ಷೇತ್ರಗಳನ್ನು ಸ್ತ್ರೀವಾದಿ ನೆಲೆಯಲ್ಲಿ ಶೋಧಿಸಲಾಗಿದೆ. ಈ ಸಂವಾದದ ಮೂಲಕ ಸ್ತ್ರೀವಾದಿ ನೆಲೆಯ ವೈಚಾರಿಕತೆ ಮಾನವೀಯ ಸ್ತರದ ಎಲ್ಲಾ ಹೋರಾಟಗಳನ್ನು ತನ್ನ ಒಡಲಲ್ಲಿ ಒಳಗೊಂಡು ಹೋರಾಟಗಳನ್ನು ರೂಪಿಸುವ, ಚಿಂತಿಸುವ ದಾರ್ಶನಿಕತೆಯ ಜರೂರಿಯನ್ನು 'ನಮ್ಮ ಮಾನಸ' ಪತ್ರಿಕೆ ಸದಾ ಎತ್ತಿ ಹಿಡಿಯುತ್ತಲೇ ಬಂದಿದೆ.

೨೦೨೪ ರಲ್ಲಿ ಡಿಜಿಟಲೈಜೇಷನ್ ಮಾಡಿಸುವಂತಹ ಅವಕಾಶ ನಮಗೆ ಒದಗಿ ಬಂದಿದೆ. ೨೮ ವರ್ಷ ತಂದ ಪತ್ರಿಕೆಗಳನ್ನು ಮತ್ತೆ ಜನರಿಗೆ ತಲುಪಿಸುವ ಸದವಕಾಶ. ಸ್ವಾಯತ್ತ ಮಹಿಳಾ ಹೋರಾಟದ ಚರಿತ್ರೆಯನ್ನು ವರ್ತಮಾನದೊಂದಿಗೆ ಬೆಸೆಯುತ್ತಾ ಹೊಸ ಬೆಳಕಿನ ಸ್ತ್ರೀವಾದಿ ನೋಟಗಳು ಮಾನವೀಯ ನೆಲೆಯಲ್ಲಿ ಈ ಹೊತ್ತಿನ ಬದುಕನ್ನು ಕೊಂಡು ಹೋಗುವಲ್ಲಿ ಸಹಾಯವಾಗಲಿ ಎಂಬ ಆಶಯದಿಂದ ಈ ಡಿಜಿಟಲೈಜೇಶನ್. ನೀವು ಇದರ ಉಪಯೋಗ ಪಡೆದುಕೊಂಡಲ್ಲಿ ನಮ್ಮ ಉದ್ದೇಶ ಸಾರ್ಥಕವಾಗುತ್ತದೆ.

ಮಾನಸ ಪತ್ರಿಕೆಯ ಡಿಜಿಟಲೀಕರಣವನ್ನು ಸರ್ವೆಂಟ್ಸ್ ಆಫ್ ನಾಲೆಡ್ಜ್ ಯೋಜನೆ ಅಡಿ, ಗಾಂಧಿ ಭವನ ಬೆಂಗಳೂರಿನ ಜಯಪ್ರಕಾಶ್ ನಾರಾಯಣ ಡಿಜಿಟಲೀಕರಣ ಕೇಂದ್ರದಲ್ಲಿ ನೆರವೇರಿಸಲಾಗಿದೆ. ಈ ಪತ್ರಿಕೆಯನ್ನು ಸುಲಭವಾಗಿ ಕನ್ನಡಿಗರಿಗೆ ದೊರಕಿಸಲು ಸಂಚಯ https://nammamanasa.sanchaya.net ತಾಣವನ್ನು ರೂಪಿಸಿದೆ.

# ‘ನಮ್ಮ ಮಾನಸ’ ಪತ್ರಿಕೆ- ನಡೆದು ಬಂದ ಹಾದಿ

- ಕರ್ನಾಟಕದ ಮಹಿಳಾ ಚಳುವಳಿಯ ಇತಿಹಾಸದಲ್ಲಿ ಅಚ್ಚಳಿಯದ ಹೆಜ್ಜೆ ಮೂಡಿಸಿದ ಮಹಿಳಾ ಪತ್ರಿಕೆಗಳಲ್ಲಿ ‘ನಮ್ಮ ಮಾನಸ’ತಿಂಗಳ ಪತ್ರಿಕೆ ಪ್ರಮುಖವಾದುದು.
- 1986ರಲ್ಲಿ ಪ್ರಾರಂಭವಾಗಿ ಸತತವಾಗಿ 28 ವರ್ಷಗಳ ಕಾಲ ಪ್ರಕಟವಾಯಿತು.
- ಪ್ರತಿ ತಿಂಗಳು 1000 ಪ್ರತಿಗಳನ್ನು ಮುದ್ರಿಸಲಾಗುತ್ತಿತ್ತು.
- 800ಕ್ಕೂ ಹೆಚ್ಚು ಮಂದಿ ಪತ್ರಿಕೆಗೆ ಚಂದಾದಾರರಾಗಿದ್ದರು.
- ‘ನಮ್ಮ ಮಾನಸ’ ಪತ್ರಿಕೆ ಸಂಪೂರ್ಣ ಸ್ವಾಯುತ್ತವಾಗಿದ್ದು ಮಹಿಳೆಯರಿಂದ ಪ್ರಕಟವಾಗುತ್ತಿತ್ತು.
- ‘ನಮ್ಮ ಮಾನಸ’ ಯಾವುದೇ ರಾಜಕೀಯ ಪಕ್ಷ, ಜಾತಿ, ಧರ್ಮ ಅಥವಾ ಯಾವುದೇ ಸಂಘಟನೆಗಳ ಮುಖವಾಣಿಯಾಗಿರಲಿಲ್ಲ.
- ‘ನಮ್ಮ ಮಾನಸ’ ಯಾವುದೇ ಸಾಂಸ್ಥಿಕ ಸಹಾಯ ಪಡೆಯದೆ, ಚಂದಾದಾರರು, ಹಿತೈಷಿಗಳು, ವೈಯಕ್ತಿಕ ದೇಣಿಗೆಯ ನೆರವಿನಿಂದ 26 ವರ್ಷಗಳು ನಿರಂತರವಾಗಿ ಪ್ರಕಟವಾಯಿತು.
- ಶ್ರೇಣೀಕೃತ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದ ‘ನಮ್ಮ ಮಾನಸ’ ಪತ್ರಿಕೆಯು ಪರ್ಯಾಯವಾಗಿ ಸಂಪಾದಕೀಯ ಮಂಡಳಿಯೇ

ಸಮಾನ ಜವಾಬ್ದಾರಿಗಳನ್ನು ಹಂಚಿಕೊಂಡು ಸಾಂಘಿಕ ನಿರ್ಧಾರಗಳನ್ನು ಕೈಗೊಳ್ಳುತ್ತಿತ್ತು.

- ಮಹಿಳಾ ಚಳವಳಿಯ ಭಾಗವಾಗಿದ್ದು ತನ್ನ ಉದ್ದೇಶದಲ್ಲಿ ಎಂದೂ ರಾಜಿ ಮಾಡಿಕೊಳ್ಳಲಿಲ್ಲ.
- ನಮ್ಮ ಮಾನಸ’ ಪತ್ರಿಕೆಯು ಅಧ್ಯಯನ ಶೀಲ ಮಹಿಳಾ ಬರಹಗಾರರ ( academic) ಮತ್ತು ಮಹಿಳಾ ಹೋರಾಟಗಾರರ (activist) ಇವರ ನಡುವೆ ಒಂದು ಸಂಪರ್ಕ ಕೊಂಡಿಯಾಗಿ ಕಾರ್ಯ ನಿರ್ವಹಿಸಿದೆ.

# ಮಹಿಳಾ ಪತ್ರಿಕೆಯ ಅವಶ್ಯಕತೆ

1970ರ ದಶಕದ ಉತ್ತರಾರ್ಧದಲ್ಲಿ ರಾಷ್ಟ್ರದಾದ್ಯಂತ ವಿವಿಧ ನಗರಗಳಲ್ಲಿ ಮಧ್ಯಮ ವರ್ಗದ ಮಹಿಳೆಯರು ಮಹಿಳಾ ಹಕ್ಕುಗಳ ಪರವಾಗಿ ಸಂಘಟಿತರಾಗುತ್ತಿದ್ದಂತಹ ಚಟುವಟಿಕೆಗಳು ತೀವ್ರವಾಗಿದ್ದವು. ಬೆಂಗಳೂರಿನಲ್ಲಿ ಮಹಿಳಾ ಹೋರಾಟಗಳ ಚಟುವಟಿಕೆಗಳಲ್ಲಿ ಹೆಚ್. ಎಸ್. ರಾಜೇಶ್ವರಿಯವರು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಮಹಿಳೆಯರ ಮೇಲೆ ನಡೆಯುತ್ತಿದ್ದ ಹಿಂಸೆ, ದೌರ್ಜನ್ಯಗಳನ್ನುಬೆಳಕಿಗೆ ತರಲು ಪತ್ರಿಕೆಯೊಂದರ ಅಗತ್ಯವಿದೆಯೆಂದು ಮನಗಂಡು ಅವರು, ಸಿ.ಜಿ.ಮಂಜುಳಾ ಮತ್ತು ಸಾವಿತ್ರಿಯವರ ಜೊತೆ ಸ್ವಾಯತ್ತವಾಗಿ ಮಹಿಳಾ ಪತ್ರಿಕೆಯೊಂದನ್ನು ಏಕೆ ತರಬಾರದೆಂಬ ಆಲೋಚನೆಯಿಂದ 1986ರಲ್ಲಿ **'ಮಾನವಿ'** ಎಂಬ ಹೆಸರಿನೊಂದಿಗೆ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಪತ್ರಿಕೆಯನ್ನು ಆರಂಭಿಸಿದರು.

ಈ ಪ್ರಯತ್ನಕ್ಕೆ ಪ್ರೋತ್ಸಾಹ ನೀಡಿ ನಿರಂತರವಾಗಿ ನೀರೆರೆದವರು ಪತ್ರಕರ್ತೆ ಡಾ. ಇಳಾ ವಿಜಯಾ. ಆರ್ಥಿಕ ನೆರವನ್ನು ದೊರಕಿಸಿಕೊಡಲು ನೆರವಾಗುವುದು, ಪತ್ರಿಕೆ ರೂಪುರೇಷೆ, ಸಲಹೆ ಸಹಕಾರ ನೀಡುವುದು, ಆದ್ಯತೆ ನೀಡಬೇಕಾದ ವಿಷಯಗಳ ಚರ್ಚೆಗಳ ಜೊತೆಗೆ ಪತ್ರಿಕೆಯ ಪ್ರೂಫ್‌ಗಳನ್ನು ನೋಡಿರುವುದನ್ನು ಮರೆಯುವಂತಿಲ್ಲ.ಅಲ್ಲದೆ ತಮ್ಮ ಮನೆಯಲ್ಲೇ **"ನಮ್ಮ ಮಾನಸ"** ದ ಸಭೆ ನಡೆಸಲು ಅವರು ಹಲವು ಬಾರಿ ಅನುವು ಮಾಡಿಕೊಟ್ಟಿದ್ದಾರೆ.

ಮೊದಲ **'ಮಾನವಿ'** ಸಂಚಿಕೆಯನ್ನು ಇಳಾ ಮುದ್ರಣಾಲಯದಲ್ಲಿ ಪ್ರಿಂಟ್ ಮಾಡಲಾಯಿತು. ತದನಂತರ '**ನಮ್ಮ ಮಾನಸ**' ಎಲ್ಲಾ ಸಂಚಿಕೆಗಳೂ ಇಳಾ ಮುದ್ರಣಾಲಯದಲ್ಲಿ ಪ್ರಿಂಟ್ ಆಗುತ್ತಿದ್ದವು. ಮಧ್ಯದಲ್ಲಿ ಒಂದೆರಡು ವರ್ಷಗಳು 'ಮಾ ಪ್ರಿಂಟರ್ಸ್'ನಲ್ಲಿ **'ನಮ್ಮ ಮಾನಸ'** ಪ್ರಿಂಟ್ ಮಾಡಲಾಗಿತ್ತು .

**'ಮಾನವಿ'** ಪತ್ರಿಕೆಯನ್ನು 1989ರಲ್ಲಿ **'ಮಾನಸ'** ಎಂಬ ಹೆಸರಿನಿಂದ ತಿಂಗಳ

ಪತ್ರಿಕೆಯಾಗಿ ನೊಂದಾಯಿಸಲಾಯಿತು.2007ರಲ್ಲಿ ಪತ್ರಿಕೆಯ ಹೆಸರನ್ನು **'ನಮ್ಮ ಮಾನಸ'** ತಿಂಗಳ ಪತ್ರಿಕೆಯಾಗಿ ಬದಲಾವಣೆ ಮಾಡಲಾಯಿತು.ನೊಂದಾವಣೆಯ ತಾಂತ್ರಿಕ ಕಾರಣಗಳಿಂದಾಗಷ್ಟೇ ಹೆಸರುಗಳ ಬದಲಾವಣೆ ಆಯಿತು.ಧ್ಯೇಯೋದ್ದೇಶಗಳಲ್ಲಿ ಕೊನೆಯವರೆಗೂ ಯಾವುದೇ ರಾಜಿಯನ್ನೂ ಪತ್ರಿಕೆ ಮಾಡಿಕೊಳ್ಳಲಿಲ್ಲ.ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದು; ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದು; ಮಹಿಳೆಯರೊಂದಿಗೆ ಆತ್ಮೀಯ, ಅರ್ಥಪೂರ್ಣ ಸಂವಾದ ನಡೆಸುವುದು ಮತ್ತು ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟ- ಪತ್ರಿಕೆಯ ಉದ್ದೇಶವಾಗಿತ್ತು.

ಸ್ವಾಯತ್ತ ಮಹಿಳಾ ಚಳವಳಿಯ ಭಾಗವಾಗಿದ್ದ ಪತ್ರಿಕೆಗೆ ಸ್ವಾಯತ್ತತೆ ಆದ್ಯ ವಿಷಯವಾಗಿತ್ತು.ಯಾವುದೇ ಸಾಂಸ್ಥೀಕೃತ ಧನ ಸಹಾಯ ಪಡೆಯದೆ ಸಾರ್ವಜನಿಕರಿಂದ ಚಂದಾ ಮತ್ತು ದೇಣಿಗೆ, ಸದಸ್ಯರ ವೈಯಕ್ತಿಕ ದೇಣಿಗೆ ಸಂಗ್ರಹಿಸಿ ಪತ್ರಿಕೆ ನಡೆಸುವುದು, ಸಮಾನವಾಗಿ ಜವಾಬ್ದಾರಿಗಳನ್ನು ಹಂಚಿಕೊಂಡು ಒಟ್ಟಿಗೆ ನಿರ್ಧಾರ ತೆಗೆದುಕೊಳ್ಳುವಂತಹ ಸಾಂಘಿಕ ಪ್ರಯತ್ನ ಮತ್ತು ಪರ್ಯಾಯ ರಾಜಕೀಯ ಬದ್ಧತೆಯಂತಹ ಸ್ವಾಯತ್ತ ರಾಜಕಾರಣದ ನಂಬಿಕೆಗಳು ಪತ್ರಿಕೆಯ ಜೀವಾಳವಾಗಿತ್ತು.

ಮೂವರಿಂದ ಆರಂಭವಾದ ಪತ್ರಿಕೆ ದೃಢ ಹೆಜ್ಜೆಗಳನ್ನಿಟ್ಟು ಬೆಳೆದಂತೆ ಅದರ **ಸಂಪಾದಕೀಯ ಮಂಡಳಿಯೂ** ಬೆಳೆಯಿತು. ಹೆಚ್. ಎಸ್. ರಾಜೇಶ್ವರಿ, ಬಿ.ಎನ್. ಸುಮಿತ್ರಾಬಾಯಿ, ಚಂಪಾವತಿ ಹೆಚ್.ಎಸ್, ವೇದವಲ್ಲಿ, ಸವಿತ.ಎ, ಗೀತಾ ಜಿ.ಎಸ್, ದು.ಸರಸ್ವತಿ, ವಿ.ಗಾಯತ್ರಿ, ಗೀತಾ, ಮಧುಮತಿ, ಬಿ.ಎನ್.ಶಾರದ, ಹೆಚ್. ಎಸ್. ಪುಷ್ಪಾ, ಶ್ಯಾಮಲ, ಲಕ್ಷ್ಮಿ, ವತ್ಸಲಾ, ವನಜಾ ವೆಂ, ನೀಲಾಂಜನ ಬಿಸ್ವಾಸ್ ಅವರುಗಳು ಸಂಪಾದಕೀಯ ಮಂಡಳಿಯ ಭಾಗವಾಗಿ ಕೆಲಸ ಮಾಡಿದ್ದಾರೆ.

# 'ನಮ್ಮ ಮಾನಸದಲ್ಲಿ' ಪ್ರಕಟವಾಗುತ್ತಿದ್ದ ಲೇಖನಗಳು

ವಿಷಯಾಧಾರಿತವಾಗಿ ತರಲಾಗುತ್ತಿದ್ದ ಪತ್ರಿಕೆಯು ಮಹಿಳಾ ವಿಷಯಗಳಲ್ಲದೆ ಸಮಕಾಲೀನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಷಯವನ್ನು ಮಹಿಳಾ ದೃಷ್ಟಿಕೋನದಿಂದ ವಿಶ್ಲೇಷಿಸಿ ಪ್ರಕಟಿಸುತ್ತಿತ್ತು.

- ಸ್ವಯಂ ಉದ್ಯೋಗ ಸಂಸ್ಥೆ 'ಸೇವಾ' ಕುರಿತ ಲೇಖನ, ಆರೋಗ್ಯದ ವಿಷಯದಡಿ ತಾಯ್ತನ, ಗರ್ಭನಿರೋಧಕಗಳು, ಕುಟುಂಬ ನಿಯಂತ್ರಣ ವಿಧಾನಗಳು, ಜನಸಂಖ್ಯಾ ನೀತಿ, ಮುಟ್ಟು, ದುಡಿಯುವ ಮಹಿಳೆಯರ ಆರೋಗ್ಯ, ಅಪಾಯಕಾರಿ ಗರ್ಭನಿರೋಧಕಗಳ ಕುರಿತಾದ ಬರಹಗಳು ಪತ್ರಿಕೆಯಲ್ಲಿ ಪ್ರಕಟವಾಗಿವೆ.

- ಸ್ಕಾಟಿಶ್ ಕಲಾವಿದೆ ಕ್ಯಾರಲೈನ್, ಸ್ವಾತಂತ್ರ್ಯ ಹೋರಾಟಗಾರ್ತಿ ಕಮಲಾದೇವಿ ಚಟ್ಟೋಪಾಧ್ಯಾಯ, ಕಾರ್ಮಿಕ ನಾಯಕಿ ಅಮರ್ಜಿತ್ ಕೌರ್, ಇತಿಹಾಸಕಾರ ಪಣಿಕ್ಕರ್, ಮಾನವ ಹಕ್ಕುಗಳ ಹೋರಾಟಗಾರ್ತಿ ನಂದಿತಾ ಹಕ್ಸರ್, ಕಲಾವಿದೆ ಧನಲಕ್ಷ್ಮಿ, ನರ್ಮದಾ ಬಚಾವೋ ಆಂದೋಲನದ ಮೇಧಾ ಪಾಟ್ಕರ್ **ಅವರುಗಳ ಸಂದರ್ಶನ;**
- ಹಿಂದಿ ಲೇಖಕಿ ಮಹಾದೇವಿ ವರ್ಮಾ, ನಾಟಕಕಾರ ಎಡ್ವರ್ಡ್ ರ್ಯಾಡ್ ಜಿನಸ್ಕಿ, ಎಮಿಲಿ ಡಿಕಿನ್ ಸನ್, ಅಸ್ಸಾಂ ಲೇಖಕಿ ನಿರುಪಮಾ ಬಾರ್ಗೋ, ಉರ್ದು ಲೇಖಕಿ ಇಸ್ಮತ್ ಚುಗ್ತಾಯಿ, ಮಲಯಾಳಂ ಲೇಖಕಿ ಸಾರಾ ಜೋಸೆಫ್, ಹೋರಾಟಗಾರ್ತಿ ಇರೋಮ್ ಶರ್ಮಿಳಾ, ಖ್ಯಾತ ಗಾಯಕಿ, ಕಲಾವಿದೆ ಅಮಿರ್

ಬಾಯಿ ಕರ್ನಾಟಕಿ, ಬಂಗಾಳಿ ಲೇಖಕಿ ಮತ್ತು ಹೋರಾಟಗಾರ್ತಿ ಮಹಾಶ್ವೇತಾದೇವಿ, ಮಾರ್ವಾಡಿ ಲೇಖಕಿ ಅಲ್ಕಾ **ಅವರುಗಳ ಪರಿಚಯ;**

- ಮಾಧ್ಯಮ, ರಂಗಭೂಮಿ, ಸಿನೆಮಾ, ಸಾಹಿತ್ಯ ಮಹಿಳಾ ಸಾಹಿತ್ಯ ಸಂಶೋಧನೆ, ಭಾಷೆ, ವಿಮರ್ಶೆ **ಕುರಿತ ಲೇಖನಗಳು;**

- ರಾಜಕೀಯದಡಿ-ಮಹಿಳಾ ಮೀಸಲಾತಿ, ಚುನಾವಣೆ, ಮಹಿಳಾ ಪ್ರಾತಿನಿಧ್ಯ ಇತ್ಯಾದಿ ಕುರಿತ ಬರಹಗಳು ಪ್ರಕಟವಾಗಿವೆ.ಮುಂಗಡ ಪತ್ರ, ಚುನಾವಣಾ ಪ್ರಣಾಳಿಕೆಗಳು, ಸರ್ಕಾರಿ ನೀತಿಗಳು ಮತ್ತು ಯೋಜನೆಗಳ (ಶಿಕ್ಷಣ, ಆರೋಗ್ಯ, ಜನಸಂಖ್ಯೆಇತ್ಯಾದಿ) **ವಿಶ್ಲೇಷಣೆ**ಗಳು;

- ಪೌರಕಾರ್ಮಿಕರು, ಗಾರ್ಮೆಂಟ್ಸ್ ಕಾರ್ಮಿಕರು, ಮನೆಗೆಲಸ ಮಾಡುವ ಕಾರ್ಮಿಕರಂತಹ ಅಸಂಘಟಿತ ಕ್ಷೇತ್ರದ **ಕಾರ್ಮಿಕರ ಪರಿಸ್ಥಿತಿ**,
- ಪರಿಸರ, ಸ್ಥಳಾಂತರ,ಅಣ್ವಸ್ತ್ರೀಕರಣ, ಯುದ್ಧ, ಕೋಮುವಾದ, ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ಅಭಿವೃದ್ಧಿ ಹೆಸರಿನಲ್ಲಿ ದಮನಿತರಾಗುತ್ತಿರುವ **ಆದಿವಾಸಿಗಳ ಪರಿಸ್ಥಿತಿ,**
- ಕೋಮುವಾದ, ಲಿಂಗತ್ವ ಅಲ್ಪಸಂಖ್ಯಾತರು, ವೇಶ್ಯಾವೃತ್ತಿಯಲ್ಲಿರುವ **ಮಹಿಳೆಯರ ಪರಿಸ್ಥಿತಿ**;

- ಗಾಂಧಿ ಮತ್ತು ಲೋಹಿಯಾ ದೃಷ್ಟಿಯಲ್ಲಿ ಮಹಿಳೆ;

ಹೀಗೆ ವೈವಿಧ್ಯಮಯ ವಸ್ತುಗಳ ಹರಹು ಪತ್ರಿಕೆಯಲ್ಲಿನ ಬರಹಗಳಲ್ಲಿದೆ.ಆರಿಸಿಕೊಳ್ಳುತ್ತಿದ್ದ ವಿಷಯಗಳು ಮತ್ತು ಅವುಗಳ ಮಂಡನೆಯು ಪತ್ರಿಕೆಯ ಗಂಭೀರ ಅಧ್ಯಯನ ಮತ್ತು ಚಿಕಿತ್ಸಕ ದೃಷ್ಟಿಕೋನಕ್ಕೆ ಸಾಕ್ಷಿಯಾಗಿದೆ.

# 'ನಮ್ಮ ಮಾನಸ " ವಿಶೇಷ ಅಂಕಣಗಳು.

ಪತ್ರಿಕೆಯ ವಿಶೇಷ ಅಂಕಣಗಳಾದ **'ಸಂವೇದನೆ'** **ಮತ್ತು** **'ಮೌನ ಮಾತಾದಾಗ'** ಮಹಿಳಾ ಅಭಿವ್ಯಕ್ತಿಗೆವೇದಿಕೆಯಾಗಿತ್ತು.

**'ಸಂವೇದನೆ** 'ಎಂಬ ಅಂಕಣದಡಿ ತಮ್ಮನ್ನು ತೀವ್ರವಾಗಿ ಕಾಡಿದ, ಪ್ರಶ್ನೆಗಳನ್ನು ಹುಟ್ಟುಹಾಕಿದಂತಹ ವಿಷಯಗಳನ್ನು ಬರೆಯುವ ಅವಕಾಶವಿತ್ತು.

ಹೊಸದಾಗಿ ಬರೆಯುವವರಿಗಾಗಿ '**ಮೌನ ಮಾತಾದಾಗ**' ಎಂಬ ಅಂಕಣವಿತ್ತು.

***ಇದರ ಪೀಠಿಕೆಯಲ್ಲಿದ್ದ ಮಾತುಗಳಿವು:***

> ***(ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೇ?ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು, ವೈರುಧ್ಯಗಳಿಂದ ಕೂಡಿರಬಹುದು. ಮೊದಲಬಾರಿಗೆ ಬರೆಯಲು ಯತ್ನಿಸುವ ಲೇಖಕಿ ಲೇಖಕರಿಗಾಗಿ 'ಮೌನ ಮಾತಾದಾಗ' ಅಂಕಣವಿದೆ . ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನ ವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗೂ ಅನುಭವಗಳನ್ನು ಪುಟ್ಟ ಲೇಖನ ರೂಪದಲ್ಲಿ ಬರೆದು ಕಳಿಸಿ.ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು-ಸಂ.ಮಂಡಳಿ).***

10 'ನಮ್ಮ ಮಾನಸ " ವಿಶೇಷ ಅಂಕಣಗಳು.

**‘ಓದುಗರ ವೇದಿಕೆ’ಯಲ್ಲಿ** ಓದುಗರಿಂದ ಬರುತ್ತಿದ್ದ ಪತ್ರಗಳನ್ನು ಪ್ರಕಟಿಸಲಾಗುತ್ತಿತ್ತು.

# "ನಮ್ಮ ಮಾನಸ" ಬೆಳೆದು ಬಂದ ಇತಿಹಾಸ

**'ನಮ್ಮ ಮಾನಸ'** ಬಳಗದ ಗೆಳತಿ ಹೆಚ್. ಎಸ್. ಚಂಪಾವತಿ ಅವರು ನೀಡಿದ ಧನಸಹಾಯದಲ್ಲಿ ಖರೀದಿಸಲಾದ ಅಚ್ಚುಮೊಳೆ ಯೂನಿಟ್‌ಗಾಗಿ ಜಾಗ ಬೇಕಾದ್ದರಿಂದ 60 ರೂಪಾಯಿ ಬಾಡಿಗೆಗೆ ಕಾಡುಗೋಡಿಯಲ್ಲಿ ಮನೆಯೊಂದನ್ನು ಬಾಡಿಗೆಗೆ ಪಡೆಯಲಾಗಿತ್ತು. ಈ ಯೂನಿಟ್ ಕಾರ್ಯನಿರ್ವಹಣೆಗೆ ನೆರವು ನೀಡಿದವರು ಇಳಾ ಪ್ರೆಸ್ ಮಾಲೀಕರಾದ ಗುರುಮೂರ್ತಿಯವರು. ಜೋಡಿಸಿದ ಅಚ್ಚು ಮೊಳೆಯನ್ನು ತಮ್ಮ ದ್ವಿಚಕ್ರ ವಾಹನದಲ್ಲಿ ಕಟ್ಟಿಕೊಂಡು ಕಾಡುಗೋಡಿಯಿಂದ ಚಾಮರಾಜಪೇಟೆಯ ಪ್ರೆಸ್‌ಗೆ ತೆಗೆದುಕೊಂಡು ಹೋಗುತ್ತಿದ್ದರು. ಇದು ಶ್ರಮದಾಯಕ ಕೆಲಸವಾದ್ದರಿಂದ ನಂತರ ಕಾಡುಗೋಡಿಯಲ್ಲೇ ಪ್ರೆಸ್ ಅನ್ನು ಗುರುತಿಸಿಕೊಂಡು ಸಂಚಿಕೆಗಳನ್ನು ಪ್ರಕಟಿಸಲಾಯಿತು. ನಂತರ, ವಾಪಸ್ ಇಳಾ ಮುದ್ರಣಾಲಯಕ್ಕೇ ಬದಲಾಯಿಸಿಕೊಳ್ಳಲಾಯಿತು.

**'ನಮ್ಮ ಮಾನಸ'** ಪತ್ರಿಕೆಗೂ ಮತ್ತು ಅದನ್ನು ನಡೆಸುವ ಸದಸ್ಯರ ವೈಯಕ್ತಿಕ ಬದುಕಿಗೂ ಅವಿನಾಭಾವ ಸಂಬಂಧವಿತ್ತು. ಎಲ್ಲ ಸದಸ್ಯರೂ ಬೇರೆ ಬೇರೆ ಉದ್ಯೋಗಗಳಲ್ಲಿ ಕೆಲಸ ಮಾಡುತ್ತಿದ್ದರು. ಬಿಡುವಿನ ವೇಳೆಯಲ್ಲಿ ಪತ್ರಿಕೆಯ ಕೆಲಸ ಮಾಡಬೇಕಿತ್ತು. ಕಾಡುಗೋಡಿ ಬಹಳ ದೂರವಾಗಿತ್ತು. ಹಾಗಾಗಿ '**ನಮ್ಮ ಮಾನಸ**'ದ ಪತ್ರಿಕೆಯ ಕುರಿತಂತೆ ಚರ್ಚೆ, ಸಂವಾದ ಮತ್ತು ಹಲವಾರು ಕಾರ್ಯಕ್ರಮಗಳಿಗೆ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದ ಹಿಂಭಾಗದ ಮೆಟ್ಟಿಲುಗಳನ್ನು ಆಶ್ರಯಿಸಲಾಯಿತು. ಅದು ಅತ್ಯಂತ ಆಪ್ತ ಸ್ಥಳವಾಗಿತ್ತು. ಸಾರ್ವಜನಿಕ ಜಾಗವನ್ನು **'ನಮ್ಮ ಮಾನಸ'** ಕ್ರಿಯಾಶೀಲವಾಗಿ ಬಳಸಿಕೊಂಡಿತ್ತು. ಅನೇಕ ಸಲ ಸದಸ್ಯರ ಮನೆಗಳಲ್ಲೂ ಸಭೆ ನಡೆಸಲಾಗುತಿತ್ತು.

ಬೆಂಗಳೂರಿನ ವೆಸ್ಟ್ ಆಫ್ ಕಾರ್ಡ್ ರಸ್ತೆಯಲ್ಲಿ ದು.ಸರಸ್ವತಿಯವರ ಮನೆಯ ಒಂದು ಕೊಠಡಿಯನ್ನು ಕಚೇರಿಯನ್ನಾಗಿ ಉಪಯೋಗಿಸಲಾಗುತ್ತಿತ್ತು. ನಂತರ, ಚಾಮರಾಜ ಪೇಟೆಯಲ್ಲಿ ಒಂದು ಕೊಠಡಿಯನ್ನು ಸ್ವಲ್ಪ ದಿನದ ಮಟ್ಟಿಗೆ ಬಾಡಿಗೆಗೆ ಪಡೆಯಲಾಗಿತ್ತು.

ಲೇಖನಗಳನ್ನು ಬರೆಯುವುದರ ಜೊತೆಗೆ, ಬೆಂಗಳೂರಿನ ಸುಲ್ತಾನ್ ಪಾಳ್ಯದಿಂದ ಮೂರು ರೀಮ್ ಪೇಪರ್ ಖರೀದಿಸಿ, ರೈಲಿನಲ್ಲಿ (ದರ ಕಡಿಮೆ ಎಂದು) ಅಥವಾ ಬಸ್ಸಿನಲ್ಲಿ ಕಾಡುಗೋಡಿಗೆ ತರಲಾಗುತ್ತಿತ್ತು. ವೇದಾ, ಗೀತಾ, ಮತ್ತು ಹಸೀನಾ ಜೋಡಿಸುತ್ತಿದ್ದ ಅಚ್ಚು-ಮೊಳೆಗಳನ್ನು ಪ್ರೆಸ್ ಗೆ ಒಯ್ದು ಪ್ರಿಂಟ್ ಹಾಕಿಸಿದ ಮೇಲೆ ಅದನ್ನು ತಂದು ಹಾಳೆಗಳನ್ನು ಜೋಡಿಸಿ ಕವರ್ ಪೇಜ್ ಅನ್ನು ಗಂ ಹಾಕಿ ಅಂಟಿಸಿ, ಅಡ್ರೆಸ್ ಚೀಟಿ ಮತ್ತು ಅಂಚೆ ಚೀಟಿ ಅಂಟಿಸಿ ಪೋಸ್ಟ್ ಆಫೀಸ್‌ಗೆ ಒಯ್ದು ಪೋಸ್ಟ್ ಮಾಡುವವರೆಗೂ ಎಲ್ಲ ಕೆಲಸವನ್ನು'**ನಮ್ಮ ಮಾನಸ'** ಬಳಗದವರು ಮಾಡುತ್ತಿದ್ದರು. ಎಲ್ಲರೂ ಏಕಕಾಲಕ್ಕೆ ಪತ್ರಕರ್ತೆಯರು, ಮುದ್ರಕರು,ಪ್ರಕಾಶಕರು, ಕಲಾವಿದೆಯರು (ಚಿತ್ರ ಬಿಡಿಸಲು ಕಲಾವಿದರಿಗೆ ದುಡ್ಡು ಕೊಡಬೇಕಾಗುತ್ತದೆ ಎಂದು ಕೆಲವರು ಚಿತ್ರ ಬಿಡಿಸಲಾರಂಭಿಸಿದರು) ಎಲ್ಲವೂ ಆಗಿದ್ದರು.

ತಿಂಗಳಿಗೊಮ್ಮೆ ಪತ್ರಿಕೆಯ ಪೇಸ್ಟ್ ಮತ್ತು ಪೋಸ್ಟ್ ಮಾಡಲು ಒಟ್ಟಾಗಿ ಸೇರುವುದೊಂದು ಸಡಗರದ ಸಂಗತಿಯಾಗಿತ್ತು. ಬೆಳಗಿನ ಉಪಾಹಾರ, ಮಧ್ಯಾಹ್ನದ ರುಚಿಕರ ಊಟದ ಜೊತೆಗೆ ಮಾತನಾಡುತ್ತ ಮಾಡುತ್ತಿದ್ದ ಕೆಲಸ, ನಂಬುವ ಸ್ವಾಯತ್ತ ರಾಜಕಾರಣವನ್ನು ಕ್ರಿಯೆಗಿಳಿಸುವುದೇ ಆಗಿತ್ತು. ಎಳ್ಳಷ್ಟೂ ಲಾಭದ ಉದ್ದೇಶವನ್ನಿಟ್ಟುಕೊಂಡಿರದಿದ್ದ '**ನಮ್ಮ ಮಾನಸ'** ಪತ್ರಿಕಾ ಬಳಗವು ಧನಸಹಾಯಕ್ಕಾಗಿ ಸಾರ್ವಜನಿಕರನ್ನೇ ಅವಲಂಬಿಸಿತ್ತು. ಅಲ್ಲದೆ ಸಿಗುವ ಧನಸಹಾಯದಲ್ಲಿ ಉತ್ಕೃಷ್ಟ ಪತ್ರಿಕೆಯನ್ನು ತರಲು ಸದಾ ಪ್ರಯತ್ನಿಸುತ್ತಿತ್ತು.'**ನಮ್ಮ ಮಾನಸ**'ಕ್ಕೆಂದು ಸಣ್ಣದೊಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದಾಗ, ತಿಂಗಳಿಗೆ 60 ರೂಪಾಯಿ ಬಾಡಿಗೆ ಕಟ್ಟುವುದೂ ದುಸ್ತರವಾದಾಗ ಚಂದಾದಾರರಲ್ಲಿ ಮಾಡಿಕೊಂಡಿದ್ದ ಈ ಕೆಳಗಿನ ಮನವಿ, ಬಳಗದ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ:

## ಮನವಿ

*("ಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀಯರ ಧ್ವನಿಯಾದ*

*'ನಮ್ಮ ಮಾನಸ' ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದ್ದರೂ ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಲು ಸಾಧ್ಯವಾಗದೆ ಇರುವುದನ್ನು ನೀವು ಈಗಾಗಲೇ ಗಮನಿಸಿರಬಹುದು. ನಮ್ಮೆಲ್ಲರ ಪ್ರಾಮಾಣಿಕ ಪ್ರಯತ್ನವನ್ನೂ ಮೀರಿ ಅಡಿಗಡಿಗೆ ಎದುರಾಗುವ ಸಮಸ್ಯೆಯಿಂದಾಗಿ ಪತ್ರಿಕೆ ತುಂಬಾ ವಿಳಂಬ ಗತಿಯಲ್ಲಿ ಪ್ರಕಟವಾಗುತ್ತಿದೆ. ಪತ್ರಿಕೆಯ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಒಂದು ಪುಟ್ಟದಾದ ಅಚ್ಚುಮೊಳೆಯ ಕೇಂದ್ರವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಇತರ ಖರ್ಚು ವೆಚ್ಚಗಳೊಂದಿಗೆ*

*ಬಾಡಿಗೆಗೆ ಹಣ ಹೊಂದಿಸುವುದು ದುಸ್ತರವಾಗುತ್ತಿದೆ. ಈ ಹಂತದಲ್ಲಿ ಪತ್ರಿಕೆಯ ಆತ್ಮೀಯ ಹಿತೈಷಿಗಳಾದ ನಿಮಗೆ ಈ ಕೆಳಗಿನ ಕಳಕಳಿಯ ಮನವಿಯನ್ನು ಮಾಡುತ್ತಿದ್ದೇವೆ. ಪ್ರತಿ ತಿಂಗಳೂ 'ಮಾನವಿ'ಯ ಆಫೀಸ್ ಬಾಡಿಗೆಗೆಂದು ರೂ.5 ಕಳಿಸಲು ಸಾಧ್ಯವೇ? ಪ್ರತಿ ತಿಂಗಳೂ ಕಳಿಸುವುದು ಸಮಸ್ಯೆ ಎನಿಸಿದರೆ, ಅರ್ಧ ವರ್ಷದ ಅಂದರೆ ರೂ.30 ಅಥವಾ ಒಂದು ವರ್ಷದ ರೂ.60 ಒಟ್ಟಿಗೆ ಕಳಿಸಬಹುದು. ನಮ್ಮ ಈ ಕಿರು ಪ್ರಯತ್ನಕ್ಕೆ ನಿಮ್ಮ ಬೆಂಬಲ ಹಾಗೂ ಪ್ರೋತ್ಸಾಹವಿದೆ ಎಂಬ ಭರವಸೆ ನಮಗಿದೆ" 1989)*

# "ನಮ್ಮ ಮಾನಸ" ಸಕ್ರಿಯವಾಗಿ ತೊಡಗಿಸಿಕೊಂಡ ಇತರ ಹೋರಾಟಗಳು

- ಕೇವಲ ಚರ್ಚಿಸಿ ದಾಖಲಿಸುವುದಕ್ಕೆ ಸೀಮಿತವಾಗದೆ ನರ್ಮದಾ ಸಾಲಿಡಾರಿಟಿ ಫೋರಂ, ಕೋಮು ಸೌಹಾರ್ದ
- ವೇದಿಕೆ, ಅಣ್ವಸ್ತ್ರೀಕರಣ ವಿರೋಧಿ ವೇದಿಕೆ, ಯುದ್ಧ ವಿರೋಧಿ ವೇದಿಕೆ, ಗಾರ್ಮೆಂಟ್ಸ್ ಮಹಿಳೆಯರ ಹೋರಾಟ, ಲಿಂಗತ್ವ ಅಲ್ಪಸಂಖ್ಯಾತರ ಹೋರಾಟ, ಪೌರಕಾರ್ಮಿಕರ ಹೋರಾಟ, ಮನೆಗೆಲಸದವರ ಹೋರಾಟಗಳ ಮೈತ್ರಿಕೂಟದಲ್ಲಿಯೂ ಮತ್ತು ಕರ್ನಾಟಕ ರಾಜ್ಯ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟದ ಚಟುವಟಿಕೆಗಳಲ್ಲಿ '**ನಮ್ಮ ಮಾನಸ**' ಸಕ್ರಿಯವಾಗಿ ತೊಡಗಿಸಿಕೊಂಡಿತ್ತು.

- ಕೌಟುಂಬಿಕ ಹಿಂಸೆ ಕುರಿತ ವಿಚಾರ ಸಂಕಿರಣ, ಹೆಚ್.ಐ.ವಿ. ಪೀಡಿತ ಮಹಿಳೆಯರೊಂದಿಗೆ ಸಂವಾದದಂತಹ ಹತ್ತು ಹಲವು ಕಾರ್ಯಕ್ರಮಗಳನ್ನು ನಡೆಸುವುದರ ಜೊತೆಗೆ ಕುಪ್ಪಳಿಯಲ್ಲಿ ಲೇಖಕಿಯರು ಮತ್ತು ದುಡಿಯುವ ಹಾಗೂ ಕಾರ್ಯಕರ್ತ ಮಹಿಳೆಯರ ನಡುವೆ ಮೂರು ದಿನಗಳ ಸಂವಾದ ಕಾರ್ಯಕ್ರಮವನ್ನು '**ನಮ್ಮ ಮಾನಸ**' ಏರ್ಪಡಿಸಿದ್ದುದು ವಿಶೇಷ.
- ಸ್ವಸಹಾಯ ಸಂಘಗಳ ರಚನೆಗೆ ಸಹಕಾರ, ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲ ಮತ್ತು ಕಾನೂನಿನ

ನೆರವು, ವಿಚಾರಗೋಷ್ಠಿ, ಸಂವಾದಗಳಂತಹ ಚಟುವಟಿಕೆಗಳನ್ನೂ ಹಮ್ಮಿಕೊಳ್ಳುತ್ತಿತ್ತು.

# 'ನಮ್ಮ ಮಾನಸ' ಕ್ಕೆ ನೆರವು ನೀಡಿದವರು.

**'ನಮ್ಮ ಮಾನಸ'** ದ ಬೆಳವಣಿಗೆಗೆ ಬಹಳಷ್ಟು ಪುರುಷರೂ ಕೈಜೋಡಿಸಿದ್ದಾರೆ. ಹಣಕಾಸಿನ ನೆರವು ನೀಡುವುದರ ಜೊತೆಗೆ ಲೇಖನ, ಅನುವಾದಗಳನ್ನೂ ಪತ್ರಿಕೆಗೆ ಕಳುಹಿಸಿಕೊಡುವುದರ ಮೂಲಕ ಸಹಕಾರ ನೀಡಿರುತ್ತಾರೆ. ಹಲವಾರು ಕಾರ್ಯಕ್ರಮಗಳ ಜವಾಬ್ದಾರಿಯನ್ನು ವಹಿಸಿಕೊಂಡು ಪತ್ರಿಕೆಯ ಜೊತೆಗಿದ್ದರು.

ಹಲವು ಇಲಾಖೆಗಳೂ ಜಾಹೀರಾತು ನೀಡುವುದರ ಮೂಲಕ ನೆರವು ನೀಡಿವೆ.

ಪತ್ರಿಕೆಗೆ ಚಂದಾ ನೀಡುವ ಮೂಲಕ, ಅಜೀವ ಚಂದಾ ನೀಡುವ ಮೂಲಕ, ಸಂಚಿಕೆಗಳನ್ನು ಪ್ರಾಯೋಜಿಸುವ ಮೂಲಕ, ಜಾಹೀರಾತು ನೀಡುವ ಮೂಲಕ ಸಹೃದಯರು 28 ವರ್ಷಗಳ ಕಾಲ ಪತ್ರಿಕೆಯನ್ನು ಬೆಂಬಲಿಸಿದ್ದಾರೆ. ಅಷ್ಟೇ ಅಲ್ಲದೆ ಅನೇಕರು ಲೇಖನಗಳನ್ನು ಬರೆಯುವ ಮೂಲಕ ಪತ್ರಿಕೆಯನ್ನುಬೆಳೆಸಿದ್ದಾರೆ.

# "ನಮ್ಮ ಮಾನಸ" ಪತ್ರಿಕೆಗೆ ನಿರಂತರವಾಗಿ ಬರೆದ ಪ್ರಮುಖ ಲೇಖಕಿ ಮತ್ತು ಲೇಖಕರು

ಡಾ. ವಿಜಯಾ, ಉತ್ತನೂರು ರಾಜಮ್ಮ ವಿ.ಶೆಟ್ಟಿ, ವಿನಯಾ ನಾಯಕ್, ಸುಧಾ ಶರ್ಮಾಚವತ್ತಿ, ಭಾಗೀರಥಿ ಹೆಗಡೆ, ಉಷಾರಾಣಿ, ರಾಧ-ಮೈಥಿಲಿ, ವೆಂ.ವನಜ, ಸಿ.ಜಿ.ಮಂಜುಳಾ, ಹೆಚ್.ಎಸ್ ಶ್ರೀಮತಿ, ಕೆ.ಶರೀಫಾ, ಸಬಿಹಾ ಭೂಮಿಗೌಡ, ರೂಪಾ ಹಾಸನ, ಬಿ.ಎನ್ ಉಷಾ, ಚಂದ್ರಮತಿ ಸೋಂದಾ, ಪ್ರೀತಿ ಶುಭಚಂದ್ರ,ಪಾರ್ವತಿ ಐತಾಳ್, ನಾಗೇಶ್ ಹೆಗಡೆ, ಮೀರಾ ನಾಯಕ್, ಸತ್ಯನಾರಾಯಣ ಹೆಚ್.ಎನ್, ಡಿ.ಬಿ.ರಜಿಯಾ,ಹೇಮಲತಾ ಹೆಚ್.ಎಂ, ಸ.ಉಷಾ, ಆರ್.ಸುನಂದಮ್ಮ ರಂಜಾನ್ ದರ್ಗಾ, ಮಮತಾ ಜಿ.ಸಾಗರ, ವಾಣಿ ಪೆರಿಯೋಡಿ, ಚಂದ್ರಕಲಾ ನಂದಾವರ, ಸುನಂದಾ ಪ್ರಕಾಶ್ ಕಡಮೆ, ಶೈಲಜಾ ಹಿರೇಮಠ್,

ಬಿ.ಎನ್.ಸುಮಿತ್ರಾಬಾಯಿ, ಎಲ್.ಸಿ.ಸುಮಿತ್ರಾ, ಶೈಲಜಾ ಉಡುಚಣ, ಕೆ. ನೀಲಾ, ಎಂ.ಎಸ್.ಆಶಾದೇವಿ, ಹೆಚ್.ಎಸ್. ರಾಘವೇಂದ್ರರಾವ್, ತಾಜುಮಾ, ಪಿ.ಚಂದ್ರಿಕಾ, ಎಂ.ಹೆಚ್.ಕೃಷ್ಣಯ್ಯ, ಲತಾ ಗುತ್ತಿ, ಸೇತುಮಾಧವ ಹೆಚ್.ಎನ್, ಪ್ರತಿಭಾ ನಂದಕುಮಾರ್, ಎಸ್. ಮಾಲತಿ, ಕೋ.ಚೆನ್ನಬಸ್ಸಪ್ಪ, ಮಾಲತಿ ಪಟ್ಟಣಶೆಟ್ಟಿ, ಸಬಿತಾ ಬನ್ನಾಡಿ, ಸವಿತಾ ನಾಗಭೂಷಣ, ಮನೋರಂಜನಿ, ಚರಿತಾ ಮೈಸೂರು, ಕವಿತಾ ರೈ ಹೆಚ್, ಎಸ್ ಅನುಪಮಾ, ಪದ್ಮಿನಿ ನಾಗರಾಜ್, ಕೆ.ಬಿ.ಸರಸ್ವತಿ, ಲವಿತ್ರ ವಸ್ತ್ರದ್, ಕೆ.ವಿ.ನೇತ್ರಾವತಿ, ಯರ್ರಿಸ್ವಾಮಿ, ಶಾರದಾ ಗೋಪಾಲ್, ಗಿರಿಜಾ ಶಾಸ್ತ್ರಿ, ಶೀತಲ್ ಭಟ್, ಸಮುದ್ಯತಾ ಕಂಜರ್ಪಣೆ, ಲೇಖಾ ಅಡವಿ, ದಿಶಾ ಕೆ. ಆರ್, ಪ್ರೇಮಾವತಿ ಹೊಸಕೊಪ್ಪ, ಶೈಲಜಾ.ಕೆ, ಸರೋಜಾ

ಸಂತಿ, ಹೆಚ್.ಎಲ್ ಪುಷ್ಪಾ, ಲಲಿತಾ ಸಿದ್ದಬಸವಯ್ಯ ಸೇರಿದಂತೆ ಹಲವಾರು ಪ್ರಮುಖ ಲೇಖಕಿ ಮತ್ತು ಲೇಖಕರು ಪತ್ರಿಕೆಗೆ ನಿರಂತರವಾಗಿ ಬರೆದಿದ್ದಾರೆ.

ಇನ್ನು '**ನಮ್ಮ ಮಾನಸ**' ಪತ್ರಿಕೆ ಪ್ರಕಟಿಸುವುದು ನಡೆಸುವುದು ಹಲವಾರು ಕಾರಣಗಳಿಂದ ಕಷ್ಟ್ಟವಾದಾಗ ಕಿರಿಯ ಗೆಳತಿಯರಾದ ದಿಶಾ ಕೆ. ಆರ್., ಲೇಖಾ ಅಡವಿ, ನಿರ್ಮಲಾ , ಜಾಹ್ನವಿ.ಎ, ನಿಹಾರಿಕಾ ಶೆಣೈ, ಸಮುದ್ಯತಾ ಕಂಜರ್ಪಣೆ, ಶೀತಲ್ ಭಟ್ ಅವರುಗಳು ಮುಂದೆ ಬಂದು ಒಂದು ವರ್ಷದ ಕಾಲ ಪತ್ರಿಕೆಯನ್ನು ನಡೆಸಿದರು. ಆದರೆ ಅವರೆಲ್ಲರಿಗೂ ವಿದ್ಯಾಭ್ಯಾಸ ಮತ್ತು ಮುಂದಿನ ಉದ್ಯೋಗದ ಒತ್ತಡಗಳು ಉಂಟಾದಾಗ ಪತ್ರಿಕೆಯನ್ನು 2013ರಲ್ಲಿ ಅಂತಿಮವಾಗಿ ನಿಲ್ಲಿಸಲಾಯಿತು.

'**ನಮ್ಮ ಮಾನಸ**' ಪತ್ರಿಕೆಯು ಅಧ್ಯಯನ ಶೀಲ ಮಹಿಳಾ ಬರಹಗಾರರ (academic) ಮತ್ತು ಮಹಿಳಾ ಹೋರಾಟಗಾರರ (activist) ಇವರ ನಡುವೆ ಒಂದು ಸಂಪರ್ಕ ಕೊಂಡಿಯಾಗಿ ಕಾರ್ಯ ನಿರ್ವಹಿಸಿ ಮಹತ್ವದ ಪಾತ್ರ ವಹಿಸಿದೆ. ಒಂದು ಪೀಳಿಗೆ (ತಲೆಮಾರು) ಹಾದು ಹೋಗಿದೆ. ಕಳೆದ 35 ವರ್ಷಗಳಲ್ಲಿ 28 ವರ್ಷಗಳು '**ನಮ್ಮ ಮಾನಸ**' ಪತ್ರಿಕೆಯು ಸ್ತ್ರೀವಾದದ ಬಗ್ಗೆ ಮತ್ತು ಲಿಂಗ ಅಧ್ಯಯನಗಳ ಬಗ್ಗೆ ಬರೆಯುತ್ತಾ ಕರ್ನಾಟಕದ ಮಹಿಳಾ ಚಳುವಳಿಯ ಚರಿತ್ರೆಯನ್ನು ಸ್ಥಳೀಯ ಭಾಷೆ ಕನ್ನಡದಲ್ಲಿ ದಾಖಲಿಸುವುದರ ಜೊತೆಗೆ ಸ್ವಾಯತ್ತ ಮಹಿಳಾ ಚಳವಳಿಯ ಹೆಜ್ಜೆ ಗುರುತುಗಳನ್ನು ಕಟ್ಟಿ ಕೊಟ್ಟಿದೆ.